# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1824
ಸದಸ್ಯರ ಹೆಸರು : ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 24.03.2020
ಉತ್ತರಿಸುವ ಸಚಿವರು : ಮಾನ್ಯ ನಗರಾಭಿವೃದ್ಧಿ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಮಗಳೂರು ಜಿಲ್ಲೆಯ Chikkamagalore Development Authority ರವರಿಂದ ಬಿಹಾರಿ ವಾಜಪೇಯಿ ಬಡಾವಣೆ ನಿರ್ಮಾಣ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಚಿಕ್ಕಮಗಳೂರು ನಗರಾಭಿವೃದ್ಧಿ ಪ್ರಾಧಿಕಾರದಿಂದ ಶ್ರೀ ಅಟಲ್ ಬಿಹಾರಿ ವಾಜಪೇಯಿ ವಸತಿ ಬಡಾವಣೆಯನ್ನು ನಿರ್ಮಾಣ ಮಾಡಲು ಉದ್ದೇಶಿಸಿರುವ ಯೋಜನೆಗೆ ಸರ್ಕಾರದ ಆದೇಶ ಸಂಖ್ಯೆ: ನಅಇ 185 ಮೈಅಪ್ರಾ 2011, ದಿನಾಂಕ: 22.12.2012 ರನ್ವಯ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. |
| ಆ) | ಬಂದಿದ್ದಲ್ಲಿ, ಈ ಯೋಜನೆಯನ್ನು ಯಾವಾಗ ಪ್ರಾರಂಭ ಮಾಡಲಾಯಿತು ಹಾಗೂ ಇದುವರೆವಿಗೂ ಬಿಡುಗಡೆ ಮಾಡಿರುವ ಅನುದಾನ ಎಷ್ಟು; (ಸಂಪೂರ್ಣ ವಿವರ ಒದಗಿಸುವುದು); | ಸರ್ಕಾರದ ಆದೇಶ ಸಂಖ್ಯೆ: ನಅಇ 185 ಮೈಅಪ್ರಾ 2011, ದಿನಾಂಕ: 22.12.2012 ರಲ್ಲಿ ಚಿಕ್ಕಮಗಳೂರು ನಗರಾಭಿವೃದ್ಧಿ ಪ್ರಾಧಿಕಾರದಿಂದ ಅಭಿವೃದ್ಧಿಪಡಿಸಲು ಉದ್ದೇಶಿಸಿದ್ದ ಶ್ರೀ ಅಟಲ್ ಬಿಹಾರಿ ವಾಜಪೇಯಿ ವಸತಿ ಬಡಾವಣೆಯನ್ನು ರೂ. 127,11,49,089.00 ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ. ಈ ಯೋಜನೆಯು ರೈತರ ಸಹಭಾಗಿತ್ವದಲ್ಲಿ 40:60 ಯೋಜನೆಯಾಗಿದ್ದು, ಸುಮಾರು 193 ಎಕರೆ ವಿಸ್ತೀರ್ಣದ ಪ್ರದೇಶದಲ್ಲಿ ವಸತಿ ಬಡಾವಣೆಯನ್ನು ನಿರ್ಮಾಣ ಮಾಡಲು ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ.<br><br>ಮುಂದುವರೆದು, ಸರ್ಕಾರದ ಆದೇಶ ಸಂಖ್ಯೆ: ನಅಇ 185 ಮೈಅಪ್ರಾ 2011, ದಿನಾಂಕ: 17.01.2013 ರಲ್ಲಿ ಸದರಿ ಬಡಾವಣೆಯ ವಿದ್ಯುದೀಕರಣ ಕಾಮಗಾರಿಯನ್ನು ರೂ. 17,17,65,641.1 ಹಾಗೂ ಒಳಚರಂಡಿ ಕಾಮಗಾರಿಯನ್ನು ರೂ. 16,61,42,710.99 ಗಳ ಅಂದಾಜಿನಲ್ಲಿ ಕೈಗೊಳ್ಳಲು ಅನುಮೋದನೆ ನೀಡಲಾಗಿರುತ್ತದೆ. ಇವುಗಳ ಒಟ್ಟಾರೆ ಮೊತ್ತ ರೂ. 160.90 ಕೋಟಿಗಳಾಗಿರುತ್ತವೆ.<br><br>2012-13 ನೇ ಸಾಲಿನ ಎಸ್.ಆರ್.ದರಗಳನ್ವಯ ಶೇ.18.5 ರಷ್ಟು ಹೆಚ್ಚುವರಿಯಾಗಿ ಒಟ್ಟು ಮೊತ್ತ ರೂ. 191.30 ಕೋಟಿಗಳಲ್ಲಿ ಕಾಮಗಾರಿಯನ್ನು ಕೈಗೊಳ್ಳಲು ದಿನಾಂಕ: 19.01.2013 ರಲ್ಲಿ ಮಂಜೂರಾತಿಯನ್ನು ನೀಡಲಾಗಿದೆ. |

| | | |
|---|---|---|
| | | ಶ್ರೀ ಅಟಲ್ ಬಿಹಾರಿ ವಾಜಪೇಯಿ ವಸತಿ ಯೋಜನೆಯನ್ನು ದಿನಾಂಕ: 04.02.2013 ರಂದು ಕಾಮಗಾರಿ ಕಾರ್ಯಾದೇಶ ನೀಡಿ ಪ್ರಾರಂಭ ಮಾಡಲಾಗಿರುತ್ತದೆ. ನಂತರ ಚಿಕ್ಕಮಗಳೂರು ನಗರಾಭಿವೃದ್ಧಿ ಪ್ರಾಧಿಕಾರದ ಆರ್ಥಿಕ ಪರಿಸ್ಥಿತಿಯು ಸುಸ್ಥಿತಿಯಲ್ಲಿ ಇಲ್ಲದಿದ್ದ ಕಾರಣದಿಂದಾಗಿ ಯೋಜನೆ ಸ್ಥಗಿತಗೊಂಡಿತ್ತು. ಸದರಿ ಯೋಜನೆಗೆ ಸರ್ಕಾರದಿಂದ ಯಾವುದೇ ಅನುದಾನ ನೀಡಿರುವುದಿಲ್ಲ.<br><br>ಈ ಯೋಜನೆಯ ಕಾಮಗಾರಿಗಳನ್ನು ಪೂರ್ಣಗೊಳಿಸಲು ದಿನಾಂಕ: 16.12.2019 ರಂದು KUIDFC ಯಿಂದ ರೂ.50.00 ಕೋಟಿಗಳ ಸಾಲವನ್ನು ಪಡೆಯಲಾಗಿದೆ. ಪ್ರಾಧಿಕಾರದಿಂದ ಇದುವರೆವಿಗೆ ಒಟ್ಟಾರೆ ರೂ. 134.66 ಕೋಟಿಗಳಷ್ಟು ಸದರಿ ಯೋಜನೆಯ ಕಾಮಗಾರಿಗಳ ನಿರ್ಮಾಣಕ್ಕಾಗಿ ವೆಚ್ಚ ಮಾಡಲಾಗಿದೆ. |
| ಇ) | ಕಾಮಗಾರಿ ಕೈಗೆತ್ತಿಕೊಳ್ಳುವ ಮುಂಚೆ ಸರಿಯಾದ ರೀತಿಯಲ್ಲಿ ಯೋಜನೆ ರೂಪಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕರ್ನಾಟಕ ನಗರಾಭಿವೃದ್ಧಿ ಕಾಯ್ದೆ 1987 ಕಲಂ 15 ರಡಿ ಯೋಜನೆಯನ್ನು ಕೈಗೆತ್ತಿಕೊಂಡಿದ್ದು, ಉಪ್ಪಳ್ಳಿ-ಇಂದಾವರ ಗ್ರಾಮದಲ್ಲಿ ರೈತರ ಸಹಭಾಗಿತ್ವದೊಂದಿಗೆ 60:40 ರ ಅನುಪಾತದಲ್ಲಿ ಪ್ರಾಧಿಕಾರದಿಂದ ಯೋಜನೆಯನ್ನು ಕೈಗೆತ್ತಿಕೊಂಡು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1988 ಕಲಂ (15ಬಿ) ರಡಿ ಸರ್ಕಾರ ಅನುಮೋದನೆ ನೀಡಿರುತ್ತದೆ.<br>ಚಿಕ್ಕಮಗಳೂರು ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ 2008-09 ನೇ ಸಾಲಿನಲ್ಲಿ ಪ್ರಾಧಿಕಾರದಿಂದ ರಚಿಸುವ ಬಡಾವಣೆಗಳ ನಿವೇಶನ ಹಂಚಿಕೆಗಾಗಿ ಬೇಡಿಕೆ ಸಮೀಕ್ಷೆಯನ್ನು ಮಾಡಲಾಗಿದ್ದು, ಅದರಂತೆ 7954 ಸಾರ್ವಜನಿಕರು ನಿವೇಶನಕ್ಕಾಗಿ ನೊಂದಣಿ ಮಾಡಿಕೊಂಡಿದ್ದರು. ಇದರ ಪ್ರಕಾರ 1/3 ನೇ ಭಾಗ ಅರ್ಜಿಗಳನ್ವಯ ಅಂದರೆ 2651 ಅರ್ಜಿಗಳು, ನಿವೇಶನ ಕೋರಿ ಬರುವುದನ್ನು ನಿರೀಕ್ಷಿಸಲಾಗಿತ್ತು. ಈ ಬಡಾವಣೆಯ ನಿರ್ಮಾಣದಿಂದ ಸುಮಾರು 2500 ವಿವಿಧ ಅಳತೆಯ ನಿವೇಶನಗಳು ರಚಿಸಲಾಗುತ್ತಿದ್ದು. ಇದರಿಂದ ಪ್ರಾಧಿಕಾರಕ್ಕೆ ಶೇ.60% ರಷ್ಟು ಭಾಗದಲ್ಲಿ 1500 ನಿವೇಶನಗಳು ಲಭ್ಯವಾಗುತ್ತಿದ್ದು. ಸದರಿ ನಿವೇಶನದ ಬೆಲೆ ಪ್ರತಿ ಚದರ ಅಡಿಗೆ ರೂ. 660/- ಗಳಂತೆ ನಿಗದಿಪಡಿಸಲಾಗಿತ್ತು. ಇದರಿಂದಾಗಿ ರೂ. 115 ಕೋಟಿಗಳು ಹಾಗೂ ಮೂಲೆ ನಿವೇಶನ, ವಾಣಿಜ್ಯ ನಿವೇಶನ ಮತ್ತು ನಾಗರೀಕ ಸೌಕರ್ಯ ನಿವೇಶನಗಳಿಂದ ಸುಮಾರು 130 ಕೋಟಿ ಒಟ್ಟಾಗಿ 245 ಕೋಟಿಗಳ ಆದಾಯವನ್ನು ನಿರೀಕ್ಷಿಸಿ, ಶ್ರೀ ಎ.ಬಿ.ವಾಜಪೇಯಿ ವಸತಿ ಬಡಾವಣೆಯ ಪ್ರಸ್ತಾವನೆಯನ್ನು ಕೈಗೆತ್ತಿಕೊಳ್ಳಲಾಗಿದೆ. |

| | | |
|---|---|---|
| ಈ) | ಬಂದಿದ್ದಲ್ಲಿ, ಕಾಮಗಾರಿ ವಿಳಂಬವಾಗಲು ಹೊಣೆ ಯಾರು ಹಾಗೂ ಹೊಣೆಗಾರರ ಮೇಲೆ ಸರ್ಕಾರ ಯಾವ ಕ್ರಮ ಜರುಗಿಸಿದೆ; ಯಾವ ಕಾಲಮಿತಿಯೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದು? | 2008-09 ನೇ ಸಾಲಿನಲ್ಲಿ ಪ್ರಾಧಿಕಾರದ ವತಿಯಿಂದ ರಚಿಸುವ ಬಡಾವಣೆಗಳ ನಿವೇಶನಗಳ ಹಂಚಿಕೆಗಾಗಿ ಬೇಡಿಕೆ ಸಮೀಕ್ಷೆಯನ್ನು ಮಾಡಲಾಗಿತ್ತು. ಅದರಂತೆ 7954 ಸಾರ್ವಜನಿಕರು ನಿವೇಶನಕ್ಕಾಗಿ ನೊಂದಣಿ ಮಾಡಿಕೊಂಡಿದ್ದು, 2012-13ನೇ ಸಾಲಿನಲ್ಲಿ ಶ್ರೀ ಎ.ಬಿ.ವಾಜಪೇಯಿ ವಸತಿ ಬಡಾವಣೆಗೆ ಅರ್ಜಿಗಳನ್ನು ಆಹ್ವಾನಿಸಿದಾಗ ಹಾಗೂ ಶೇ. 10 ರಷ್ಟು ಪ್ರಾರಂಭಿಕ ಠೇವಣಿಯನ್ನು ಪಾವತಿಸಲು ಸಾರ್ವಜನಿಕ ಪ್ರಕಟಣೆ ಹೊರಡಿಸಿದಾಗ ಕೇವಲ 482 ಅರ್ಜಿಗಳು ಬಾರದೇ ಇರುವುದರಿಂದ, ಹಣದ ಕೊರತೆಯಿಂದಾಗಿ ಕಾಮಗಾರಿಗಳನ್ನು ಸ್ಥಗಿತಗೊಳಿಸಲಾಗಿತ್ತು.<br>ಈ ಬಡಾವಣೆಯ ಪ್ರದೇಶವು ಗುಡ್ಡಗಾಡು ಪ್ರದೇಶವಾಗಿದ್ದು, ಸ್ಥಳಾಕೃತಿ Topography ಅಸಮವಾಗಿರುವುದರಿಂದ ಹಾಗೂ ಸುಮಾರು 30 ಎಕರೆ ಪ್ರದೇಶದಲ್ಲಿ ಗಟ್ಟಿಕಲ್ಲು ಇರುವುದರಿಂದ ಕಾಮಗಾರಿ ನಿರ್ವಹಿಸುವಲ್ಲಿ ವಿಳಂಬವಾಗಿರುತ್ತದೆ.<br>ಕಳೆದ 2 ವರ್ಷಗಳಲ್ಲಿ ಚಿಕ್ಕಮಗಳೂರಿನಲ್ಲಿ ಮಳೆ ಹೆಚ್ಚಾಗಿದ್ದು, 2018-19 ರಲ್ಲಿ 4 ತಿಂಗಳುಗಳ ಕಾಲ ಸತತವಾಗಿ ಮಳೆ ಬಂದಿರುವುದರಿಂದ ಮತ್ತು ಪ್ರಸ್ತುತ ಸಾಲಿನಲ್ಲಿಯೂ ಸಹ ಜುಲೈ ತಿಂಗಳಿನಿಂದ ಸತತವಾಗಿ ಮಳೆಯಾಗಿರುವುದರಿಂದ ಕಾಮಗಾರಿಯ ವಿಳಂಬವಾಗಿರುತ್ತದೆ.<br>ಕಳೆದ 2 ವರ್ಷಗಳ ಕಾಲ ಮಳೆಗಾಲವನ್ನು ಹೊರತುಪಡಿಸಿ ಕಾಮಗಾರಿಯನ್ನು ನಿರಂತರವಾಗಿ ನಿರ್ವಹಿಸುತ್ತಿದ್ದು, ಪ್ರಸ್ತುತ ಸುಮಾರು ಶೇ. 85% ರಷ್ಟು ಕಾಮಗಾರಿಯು ಭೌತಿಕವಾಗಿ ಪೂರ್ಣಗೊಂಡಿದ್ದು, ಬಾಕಿ ಶೇ. 15% ರಷ್ಟು ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. ಸುಮಾರು ಒಂದು ತಿಂಗಳ ಕಾಲದಲ್ಲಿ ಅಂದರೆ ಏಪ್ರಿಲ್ 2020 ರ ಅಂತ್ಯಕ್ಕೆ ಪೂರ್ಣಗೊಳಿಸಲಾಗುವುದು. |

**ಸಂಖ್ಯೆ: ನಅಇ 15 ಎಲ್‌ಸಿಕ್ಯೂ 2020 (ಇ-ಕಡತ)**

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು.